## 103. ಅಲ್ ಅಸ್ರ್

ಸೂ. 3 ರು. 1

سُوْرَةُ الْعَصْرِ مَكِّيَّةٌ · اٰيَاتُهَا ٣ · رُكُوْعُهَا ١

(ಅವತೀರ್ಣ - ಮಕ್ಕಾದಲ್ಲಿ)

بِسْمِ اللّٰهِ الرَّحْمٰنِ الرَّحِيْمِ

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

وَالْعَصْرِ ①

1. ಕಾಲದಾಣೆ,[1]

اِنَّ الْاِنْسَانَ لَفِيْ خُسْرٍ ②

2. ನಿಜವಾಗಿ ಮನುಷ್ಯನು ಮಹಾ ನಷ್ಟದಲ್ಲಿದ್ದಾನೆ-

اِلَّا الَّذِيْنَ اٰمَنُوْا وَعَمِلُوا الصّٰلِحٰتِ وَتَوَاصَوْا بِالْحَقِّ ۙ وَتَوَاصَوْا بِالصَّبْرِ ③

3. ಸತ್ಯವಿಶ್ವಾಸ ಸ್ವೀಕರಿಸಿದ, ಸತ್ಕರ್ಮ ಮಾಡುತ್ತಿದ್ದ ಮತ್ತು ಪರಸ್ಪರ ಸತ್ಯ ಹಾಗೂ ಸಹನೆಯನ್ನು ಉಪದೇಶಿಸುತ್ತಿದ್ದವರ ಹೊರತು.

---

1. ಕಾಲವೆಂದರೆ ಗತಕಾಲ ಮತ್ತು ವರ್ತಮಾನ ಕಾಲಗಳೆರಡೂ ಆಗಿವೆ. ಇದರ ಆಣೆ ಹಾಕಿರುವುದರ ಅರ್ಥ ಮುಂದೆ ಪ್ರಸ್ತಾಪಿಸಲಾಗುತ್ತಿರುವ ವಿಷಯಗಳು ಸತ್ಯವಾದುದೆಂದು ಇತಿಹಾಸವೂ ಸಾಕ್ಷಿ ಹೇಳುತ್ತದೆ, ಅಂತೆಯೇ ವರ್ತಮಾನ ಕಾಲವೂ ಅದಕ್ಕೆ ಸಾಕ್ಷಿಯಾಗಿದೆ ಎಂದಾಗಿದೆ.